ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ನಂತರ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (3) ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (4) ರಲ್ಲಿನ ಸೂಚನಾಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (5) ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(5)ಸಿಆರ್:69:01-02, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ. ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀ ಗಣಪತಿ ಎನ್. ಸುಗಾವಿ, ಶುಶ್ರೂಷಕರು, ಇವರು ಸರ್ಕಾರಿ ಸೇವೆಗೆ ದಿನಾಂಕ: 5.10.96 ರಿಂದ ಇಲ್ಲಿಯವರೆಗೆ ಗೈರುಹಾಜರಾಗಿರುವುದು ವಿಚಾರಣೆಯಿಂದ ಸಾಬೀತಾಗಿರುವುದರಿಂದ ದಂಡನೆಯಾಗಿ ಸಿಸಿಎ ನಿಯಮ 8(8)ರ ಅಡಿಯಲ್ಲಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿದ್ದೇನೆ.

**ಡಾ. ಜಿ.ಬಿ. ದೇಸಾಯಿ**

ಪಿ.ಆರ್. 653 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಯಲ್ಲಿರುವ ಕೆಸ್ತೂರು ಸಾಮೂಹಿಕ ಬೇಸಾಯ ನೀರಾವರಿ ಕೊಳವೆಬಾವಿಗಳ ಸಹಕಾರ ಸಂಘ ನಿ, ದೊ.ಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸ.ಸಂ.ಸ.ನಿ, ದೊ.ಪುರ ರವರ ಪತ್ರ ಸಂಖ್ಯೆ: ಸನಿ-47:ಸಮಾಪನೆ:67:2003-04, ದಿನಾಂಕ: 28.2.2004.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:106:2001-2002, ದಿನಾಂಕ: 20.3.2002.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಡಿ:ಆರ್‌ಜಿಎನ್:13186:97-98, ದಿನಾಂಕ: 29.1.1998 ರಲ್ಲಿ ನೋಂದಣಿಯಾಗಿದ್ದು, ಈ ಸಂಘವು ಬೈಲಾ ಉದ್ದೇಶಗಳ ರೀತ್ಯಾ ಕಾರ್ಯಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರಿಂದ ಮತ್ತು ಇದರಿಂದ ಸಂಘದ ಸದಸ್ಯರಿಗೆ ಯಾವುದೇ ಅನುಕೂಲವಾಗದೇ ಇರುವ ಪ್ರಯುಕ್ತ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು ನೋಂದಣಿಯಾದಾಗಿನಿಂದ ಬೈಲಾ ಉದ್ದೇಶಗಳ ರೀತ್ಯಾ ಕಾರ್ಯಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರಿಂದ, ಸಂಘದ ಕಾರ್ಯಕಾರಿ ಸಮಿತಿಯವರು ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ಇಲ್ಲದೇ ಇರುವುದರಿಂದ, ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಉಲ್ಲೇಖ (2)ರ ಪತ್ರದ ಆದೇಶದಲ್ಲಿ ಸಮಾಪನೆಗೊಳಿಸಿ ಶ್ರೀ ಎನ್.ಜಿ. ಪ್ರಸಾದ್, ದ್ವಿತೀಯ ದರ್ಜೆ ಸಹಾಯಕರು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ರವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಈ ಸಂಘವು ಕಾರ್ಯಚಟುವಟಿಕೆ ನಡೆಸಿರುವುದಿಲ್ಲ. ಸಂಘದಲ್ಲಿ ಒಟ್ಟು ರೂ.18,430-50ಗಳ ಜವಾಬ್ದಾರಿಯಿದ್ದು, ಮತ್ತು ಆಸ್ತಿಗಳು ರೂ.8,825-00 ಗಳಿದ್ದು ಈ ಬಗ್ಗೆ ಯಾವುದೇ ವಿವರಗಳಾಗಲೀ, ದಾಖಲೆಗಳಾಗಲೀ ಲಭ್ಯವಿಲ್ಲದೇ ಇರುವ ಕಾರಣ, ಸದರಿ ಸಂಘದಲ್ಲಿ ಬೆಂಗಳೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ಉಳಿತಾಯ ಖಾತೆಯಲ್ಲಿ ರೂ.4,702-00 ಗಳಿದ್ದು ವಾಸ್ತವವಾಗಿ ರೂ.1380-00 ಗಳಲ್ಲಿ ರೂ.1280-00 ಗಳನ್ನು ಉಪನಿಬಂಧಕರ ಪಿ.ಡಿ. ಖಾತೆಗೆ ದಿನಾಂಕ: 27.2.2004 ರಲ್ಲಿ ವರ್ಗಾಯಿಸಿದೆ, ರೂ.100-00 ಗಳನ್ನು ಸರ್ಕಾರದ ಆಡಿಟ್ ಫೀಯನ್ನು ಪಾವತಿಸಿರುವುದಾಗಿ ಹಾಗೂ ದಿನಾಂಕ: 27.2.2004 ರಂದು ಸಮಾಪನಾಧಿಕಾರಿಯವರು ಸಭೆಯನ್ನು ನಡೆಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ತೀರ್ಮಾನಿಸಿರುತ್ತಾರೆ. ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ ದಿನಾಂಕ: 21.03.2004 ರಂದು “ದೊಡ್ಡಬಳ್ಳಾಪುರ ಮಿತ್ರ” ಪತ್ರಿಕೆಯಲ್ಲಿ ಪ್ರಕಟಣೆ ನೀಡಿ, ಪ್ರಕಟಣೆಯ ದಿನಾಂಕದಿಂದ 15 ದಿನದೊಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಇದುವರೆಗೂ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಈ ಸಂಘವು ಹೀಗೆ ಮುಂದುವರೆಯುವುದರಿಂದ, ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:106:2003-2004, ದಿನಾಂಕ: 17ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಆದ ನಾನು ಕೆಸ್ತೂರು ಸಾಮೂಹಿಕ

ಬೇಸಾಯ ನೀರಾವರಿ ಕೊಳವೆಬಾವಿಗಳ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 17.04.2004 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 654

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ**

**ಅಧಿಸೂಚನೆ ಸಂಖ್ಯೆ: ಅಮೊ.ವಾಹನ:31/03-04, ದಿನಾಂಕ: 16ನೇ ಫೆಬ್ರವರಿ 2004**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | TVS Suzuki Byke KA-04-V-250 | ನಗರ ವಲಯದ ಅ.ಮೊ. ಸಂಖ್ಯೆ: 44/2003-04 | ಕಾಣಿಸುತ್ತಿಲ್ಲ | 7807D068665 |
| 2 | Maruthi Van GA-02-A-2824 | ಪಿ.ಎಸ್.ಐ. ಸಾಗರ ಗುನ್ನೆ ನಂಬರ್ 14/2004 | ಕಾಣಿಸುತ್ತಿಲ್ಲ | ಕಾಣಿಸುತ್ತಿಲ್ಲ |
| 3 | Tata Siol KA-19-M-1938 | ಆನವಟ್ಟಿ ವಲಯದ ಅ.ಮೊ. ಸಂಖ್ಯೆ: 164/03-04 | 483DL41-15-58936 | 377003957336 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 655

**OFFICE OF THE COMMISSIONER OF COMMERCIAL TAXES IN KARNATAKA, BANGALORE**

**NOTIFICATION No. KSA.CR.04/04-05, Bangalore, dated: 12th April 2004**

In exercise of the powers conferred on me by Proviso (aaa) to sub-section (1) of Section 19AA of the KST Act, 1957 (Karnataka Act 25 of 1957), I, Ashok Kumar C. Manoli, Commissioner of Commercial Taxes, Karnataka, do hereby notify that departments of Government of Karnataka and Zilla Panchayats in the State shall not make deduction of tax at source as provided under section 19AA of the said Act from M/s. Karnataka Antibiotics and Pharmaceuticals Ltd., Bangalore, bearing KST RC No.00800302 and CST RC No.00850305 borne on the files of Deputy Commissioner of Commercial Taxes (Assessment-21), Fast Track, Bangalore from 1.4.2004 to 31.3.2005.

**ASHOK KUMAR C. MANOLI**
Commissioner of Commercial Taxes, Karnataka, Bangalore.

P.R. 656

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ ಸಂಖ್ಯೆ: ಎಫ್‌ಓಸಿ:ಸಿಎಎನ್:ಸಿಆರ್-27/2003-04, ದಿನಾಂಕ: 1ನೇ ಏಪ್ರಿಲ್ 2004**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಗ್ರಾಮಾಂತರ ಪೊಲೀಸ್ ಠಾಣೆ ಭದ್ರಾವತಿ ರವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಇಂಡಿಕ ಕಾರು ಕೆಎಲ್-11-ಜೆ-8777 | ಗ್ರಾಮಾಂತರ ಪೊಲೀಸ್ ಠಾಣೆ ಭದ್ರಾವತಿ ಗುನ್ನೆ ಸಂ:53/03 ದಿನಾಂಕ: 16.2.2003. | 475101 ಕೆಕ್ಯೂಕ್ಯೂಪಿ ನಂ:28112 | 600131 ಕೆಕ್ಯೂಕ್ಯೂಪಿ ನಂ:27324 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೇ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್. 657

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ, ಪುತ್ತೂರು. | | 1) ಮೂಸಾ ಕುಂಜ್ಞಿ (ಪ್ರಾಯ 35 ವರ್ಷ) ಬಿನ್ ಬಡುವ ಕುಂಜ್ಞಿ, ಅಡ್ಕ ಸ್ಥಳ, ಕಾಸರಗೋಡು. |
| | | 2) ಉಮ್ಮರ್ (ಪ್ರಾಯ 33 ವರ್ಷ) ಬಿನ್ ಮೈದಿನ್ ಕುಂಜ್ಞಿ, ಪೆರ್ಲ ಕಾಸರಗೋಡು. |
| | | 3) ವಿಕ್ರಂ ಪೈ (ಪ್ರಾಯ 26 ವರ್ಷ) ಬಿನ್ ಸರ್ವೋತ್ತಮ ಪೈ, ಕುಂಬ್ಳೆ, ಕಾಸರಗೋಡು. |
| | | 4) ಅನೀಫ್ (ಪ್ರಾಯ 24 ವರ್ಷ) ಬಿನ್ ಮಹಮ್ಮದ್ ಕುಂಜ್ಞಿ, ಪೆರ್ಲ, ಕಾಸರಗೋಡು, ಕೇರಳ ರಾಜ್ಯ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 17.10.2003 ರಂದು ಪೊಲೀಸು ಉಪ ನಿರೀಕ್ಷಕರು, ಪುತ್ತೂರು ನಗರ ಪೊಲೀಸು ಠಾಣೆರವರು ತಮ್ಮ ಸಿಬ್ಬಂದಿಯವರೊಂದಿಗೆ ದೊರೆತ ಖಚಿತ ವರ್ತಮಾನದ ಮೇರೆಗೆ 10.45 ಗಂಟೆ ಸಮಯದಲ್ಲಿ ಪುತ್ತೂರು ತಾಲ್ಲೂಕಿನಲ್ಲಿ ಹಾದು ಹೋಗುವ ಮಾಣಿ ಮೈಸೂರು ರಾಜ್ಯ ಹೆದ್ದಾರಿಯ ಪುತ್ತೂರು ಬೈಪಾಸ್ ರಸ್ತೆಯಲ್ಲಿ ಉರ್ಲಾಂಡಿ ಎಂಬಲ್ಲಿ ಕಾಯುತ್ತಿರುವಾಗ ಮೈಸೂರು ಕಡೆಯಿಂದ ಲಾರಿ ಸಂಖ್ಯೆ: ಕೆಎ-19 ಎಬಿ-786ನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಲಾರಿಯಲ್ಲಿ ಚಾಲಕ ಮತ್ತು ಇನ್ನಿತರ 3 ವ್ಯಕ್ತಿಗಳಿದ್ದು ಲಾರಿಯಲ್ಲಿದ್ದ ಲೋಡಿನ ಬಗ್ಗೆ ವಿಚಾರಿಸಿದಾಗ ಸರಿಯಾದ ಉತ್ತರ ದೊರಕಲಿಲ್ಲವಾದ್ದರಿಂದ ಸ್ಥಳದಲ್ಲಿದ್ದ ಪಂಚರ ಸಮಕ್ಷಮ ಲಾರಿಗೆ ಕಟ್ಟಿದ ಟರ್ಪಾಲ್‌ನ್ನು ಸರಿದು ಪರಿಶೀಲಿಸಿದಾಗ ಖಾಲಿ ಡಬ್ಬಗಳು ಜೋಡಿಸಲ್ಪಟ್ಟಿದ್ದು ಅದರ ಕೆಳಗಡೆ ಲಾರಿಯ ಬಾಡಿಯ ತನಕ 35 ಲೀಟರು ಸಾಮರ್ಥ್ಯದ ಒಟ್ಟು 200 ಕ್ಯಾನುಗಳಲ್ಲಿ ರೆಕ್ಟಿಫೈಡ್ ಸ್ಪಿರಿಟ್ ತುಂಬಿಸಿ ಲೋಡ್ ಮಾಡಿರುವುದು ಕಂಡು ಬಂತು. ಲಾರಿಯಲ್ಲಿದ್ದ ವ್ಯಕ್ತಿಗಳಲ್ಲಿ ಹಾಗೂ ಚಾಲಕನಲ್ಲಿ ರೆಕ್ಟಿಫೈಡ್ ಸ್ಪಿರಿಟನ್ನು ಸಾಗಿಸಲು ದಾಖಲೆ ಪತ್ರಗಳು ಇದೆಯೇ? ಎಂದು ವಿಚಾರಿಸಿದಾಗ ತಾನು ಯಾವುದೇ ದಾಖಲೆ ಪತ್ರಗಳನ್ನು ಹಾಜರುಪಡಿಸಲು ವಿಫಲರಾಗಿರುತ್ತಾರೆ. ನಂತರ ಸದ್ರಿ ಚಾಲಕ ಹಾಗೂ ವ್ಯಕ್ತಿಗಳ ಹೆಸರು ಮತ್ತು ವಿಳಾಸ ವಿಚಾರಿಸಿದಾಗ ತಾನು ಮೂಸಾ ಕುಂಜ್ಞಿ (ಪ್ರಾಯ 35 ವರ್ಷ ಚಾಲಕ) ಬಿನ್ ಬಡುವ ಕುಂಜ್ಞಿ, ಅಡ್ಕ ಸ್ಥಳ, ಕಾಸರಗೋಡು, 2) ಉಮ್ಮರ್ (ಪ್ರಾಯ 33 ವರ್ಷ) ಬಿನ್ ಮೈದಿನ್ ಕುಂಜ್ಞಿ, ಪೆರ್ಲ ಕಾಸರಗೋಡು, 3) ವಿಕ್ರಂ ಪೈ (ಪ್ರಾಯ 26 ವರ್ಷ) ಬಿನ್ ಸರ್ವೋತ್ತಮ ಪೈ, ಕುಂಬ್ಳೆ, ಕಾಸರಗೋಡು, 4) ಅನೀಫ್ (ಪ್ರಾಯ 24 ವರ್ಷ) ಬಿನ್ ಮಹಮ್ಮದ್ ಕುಂಜ್ಞಿ, ಪೆರ್ಲ, ಕಾಸರಗೋಡು, ಕೇರಳ ರಾಜ್ಯ ಎಂದು ತಿಳಿಸಿರುತ್ತಾರೆ. ಲಾರಿಯಲ್ಲಿದ್ದ ಪ್ಲಾಸ್ಟಿಕ್ ಕ್ಯಾನುಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಒಟ್ಟು 200.000 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ರೆಕ್ಟಿಫಡ್ ಸ್ಪಿರಿಟ್ ಇದ್ದು ಪ್ರತಿ ಕ್ಯಾನಿನಿಂದ ರಾಸಾಯನಿಕ ಪರೀಕ್ಷೆಗಾಗಿ ಒಂದು ಲೀಟರು ಸಾಮರ್ಥ್ಯದ ಮದ್ಯಸಾರವನ್ನು ತೆಗೆದು ಇಲಾಖಾ ಸೀಲಿನಿಂದ ಸೀಲು ಮಾಡಿರುತ್ತಾರೆ. ಇದು ಅಕ್ರಮ ಮದ್ಯಸಾರ ಸಾಗಾಣಿಕೆ ಆಗಿರುವುದರಿಂದ ಮದ್ಯಸಾರ ಹಾಗೂ ಖಾಲಿ ಡಬ್ಬಗಳು ಹಾಗೂ ಸಾಗಾಣಿಕೆಗೆ ಬಳಸಿದ ಲಾರಿಯನ್ನು ವಶಪಡಿಸಿಕೊಂಡು ಇದು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 14, 15(1), 32, 34, 35, 43(3)ರ ರೀತ್ಯಾ ಉಲ್ಲಂಘನೆ ಹಾಗೂ ಶಿಕ್ಷಾರ್ಹವಾಗಿರುವುದರಿಂದ ಸದರಿ ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 118/2003 ದಿನಾಂಕ: 17.10.2003 ರಂದು ಮೊಕದ್ದಮೆಯನ್ನು ದಾಖಲೆ ಮಾಡಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರ ಹಾಗೂ ಲಾರಿಯನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ಈ ಪ್ರಾಧಿಕಾರದ ಅನುಮತಿಯ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರು ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆದ ಮಾದರಿಯನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ಅದರ ತೀಕ್ಷ್ಣತೆ 66 ಡಿಗ್ರಿ ಒ.ಪಿ.ಯಾಗಿದ್ದು ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದರಿಂದ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿ ಸಂಸ್ಕರಣಾ ಘಟಕಕ್ಕೆ ಹಂಚಿಕೆ ಮಾಡಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ:81:ಡಿಟಿಸಿಆರ್:2003-04, ದಿನಾಂಕ: 20.11.2003 ರಲ್ಲಿ ಸದರಿ ಮೊಕದ್ದಮೆಯಲ್ಲಿ

ವಶಪಡಿಸಿಕೊಂಡ ಮದ್ಯಸಾರದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿರುವ ಪ್ರಮಾಣವನ್ನು ಹೊರತುಪಡಿಸಿ ಉಳಿದ 6,920.000 ಲೀಟರು ಮದ್ಯಸಾರವನ್ನು ಇದು ಮಾನವ ಸೇವನೆಗೆ ಯೋಗ್ಯವಾಗಿರುವುದರಿಂದ ಅಬಕಾರಿ ಆಯುಕ್ತರವರ ಅನುಸಮರ್ಥನೆಗೆ ಒಳಪಡಿಸಿ ಮೆ: ಮೈಶುಗರ್ ಸಾರಾಯಿ ಸಂಸ್ಕರಣಾ ಘಟಕ ಅಳಪೆ, ಪಡೀಲ್, ಮಂಗಳೂರುರವರಿಗೆ ಹಂಚಿಕೆಮಾಡಿ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಮಂಗಳೂರುರವರು ಆದೇಶ ನೀಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರ ಪತ್ರ ಸಂಖ್ಯೆ: ದಿ: 30.1.2004 ರಲ್ಲಿ ವಾಹನದ "ಬಿ" ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸುತ್ತಾ ಸದರಿ ವರದಿಯಲ್ಲಿ ವಾಹನದ ನೋಂದಣಿ ಮಾಲಿಕ ಶ್ರೀ ಅಬ್ದುಲ್ಲಾ ಬಿನ್ ಅದಂ ಕುನ್ನಿ, ಬೆಟ್ಟಂಪಾಡಿ ಪೋಸ್ಟ್, ಪುತ್ತೂರು ತಾಲ್ಲೂಕು ಎಂದು ತಿಳಿಸಿರುತ್ತಾರೆ. ವಾಹನದ ನೋಂದಣಿ ಮಾಲೀಕ ಶ್ರೀ ಅಬ್ದುಲ್ಲಾರವರಿಗೆ ದಿನಾಂಕ: 25.2.2004 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43(ಬಿ) ರಂತೆ ಕಾರಣ ಕೇಳಿ ನೋಟಿಸು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದ್ರಿ ನೋಟೀಸು ಸ್ವೀಕೃತಿಯಾಗದೇ, ನೋಟೀಸಿನಲ್ಲಿ ಪರ ಊರಿನಲ್ಲಿರುತ್ತಾರೆ ಎಂಬ ಷರಾದೊಂದಿಗೆ ಹಿಂದೆ ಬಂದಿರುತ್ತದೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 6 ತಿಂಗಳು ಕಳೆದಿದ್ದರೂ ಜಪ್ತಿ ಪಡಿಸಿರುವ ವಾಹನ ತನ್ನದೆಂದು ಕೋರಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ದಾಖಲಾತಿಗಳೊಂದಿಗೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಮದ್ಯಸಾರವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಆದರೆ ಈ ಪ್ರಕರಣವು ದಾಖಲಾಗಿ ಸುಮಾರು 6 ತಿಂಗಳು ಕಳೆದಿದ್ದರೂ ಈವರೆಗೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ವಾಹನದ ಬಿಡುಗಡೆಗೆ ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡಿರುವುದು ಸ್ಪಷ್ಟವಾಗಿರುತ್ತದೆ. ಅಲ್ಲದೇ ದಿನಾಂಕ: 17.10.2003 ವಾಹನ ಸಂಖ್ಯೆ: ಕೆಎ-19 ಎಬಿ-786 ಯಲ್ಲಿ ಅಕ್ರಮವಾಗಿ ಸಾಗಣೆಯಾಗುತ್ತಿದ್ದ ಮದ್ಯಸಾರವನ್ನು ಪತ್ತೆ ಹಚ್ಚಿ, ಮದ್ಯಸಾರವನ್ನು ಮತ್ತು ವಾಹನವನ್ನು ಸ್ಥಳ ಮಹಜರಿನೊಂದಿಗೆ ಜಪ್ತಿ ಪಡಿಸಿ ಪೊಲೀಸು ಉಪ ನಿರೀಕ್ಷಕರು, ಪುತ್ತೂರು ನಗರ ಪೊಲೀಸು ಠಾಣೆ ಇವರು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಅಲ್ಲದೇ ರಾಸಾಯನಿಕ ತಜ್ಞರ ವರದಿಯಂತೆ ಜಪ್ತಿ ಪಡಿಸಿರುವ ವಸ್ತು ಮದ್ಯಸಾರವೆಂದು ದೃಢೀಕರಿಸಲ್ಪಟ್ಟಿರುತ್ತದೆ. ಈ ಮೇಲಿನ ವಿದ್ಯಮಾನಗಳಿಂದ ಮತ್ತು ಈ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲೆ ಹಾಗೂ ಸಾಕ್ಷ್ಯಾಧಾರಗಳಿಂದ ಜಪ್ತಿಗೊಳಿಸಿರುವ ವಾಹನದಲ್ಲಿ ಅಕ್ರಮ ಮದ್ಯಸಾರವು ಸಾಗಾಣಿಕೆಯಾಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ವಾಹನ ಮತ್ತು ಅಕ್ರಮ ಮದ್ಯಸಾರವನ್ನು ಜಪ್ತುಪಡಿಸಿ 6 ತಿಂಗಳು ಮೀರಿದ್ದು ಈ ಸೊತ್ತುಗಳನ್ನು ತಮ್ಮದೆಂದು ಕೋರಿ ಯಾವೊಬ್ಬ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಹಾಗೂ ಜಪ್ತುಪಡಿಸಲಾಗಿರುವ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ ಬಿಸಿಲು, ಮುಂತಾದ ಹವಾಮಾನದ ವೈಪರೀತ್ಯದಿಂದ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಲಾರಿ ಸಂಖ್ಯೆ: ಕೆಎ-19 ಎಬಿ-786 ನ್ನು ಕರ್ನಾಟಕ ಅಬಕಾರಿ ಕಾಯ್ದೆ 43(ಸಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಾಣಬರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ:81:ಡಿಟಿಸಿಆರ್:2003-2004, ದಿನಾಂಕ: 25ನೇ ಮಾರ್ಚ್ 2004**

ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಪೊಲೀಸ್ ಉಪ ನಿರೀಕ್ಷಕರು, ಪುತ್ತೂರು ನಗರ ಪೊಲೀಸ್ ಠಾಣೆ ಇವರ ಮೊಕದ್ದಮೆ ಸಂಖ್ಯೆ: 118/2003 ದಿನಾಂಕ: 17.10.2003 ರಲ್ಲಿ ವಶಪಡಿಸಿಕೊಂಡಿರುವ ವಾಹನ ಲಾರಿ ಸಂಖ್ಯೆ: ಕೆಎ-19 ಎಬಿ-786 ನ್ನು ಮತ್ತು ವಶಪಡಿಸಿಕೊಳ್ಳಲಾಗಿರುವ 7000.000 ಲೀಟರು ಮದ್ಯಸಾರದ ಪೈಕಿ ಮಾದರಿಗಳ ಪ್ರಮಾಣವನ್ನು ಹೊರತುಪಡಿಸಿ, ಒಟ್ಟು 6920.000 ಲೀಟರು ಮದ್ಯಸಾರವನ್ನು ದಿನಾಂಕ: 20.11.2003ರ ಆದೇಶದಂತೆ, ಮೈಶುಗರ್ ಕಂಪನಿ ಸಾರಾಯಿ ಸಂಸ್ಕರಣಾ ಘಟಕ, ಮಂಗಳೂರು, ಇವರಿಗೆ ಸಾರಾಯಿ ಉತ್ಪಾದನೆ ಬಗ್ಗೆ ಹಂಚಿಕೆ ಮಾಡಲಾಗಿರುವ ಆದೇಶವನ್ನು ಅನುಸರಿಸಿ, ಸದ್ರಿ 6,920.000 ಲೀಟರು ಮದ್ಯಸಾರ ಹಾಗೂ 700 ಖಾಲಿ ಡಬ್ಬಗಳನ್ನು ಮತ್ತು 200 ಖಾಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಹಾಗೂ ವಶಪಡಿಸಿಕೊಳ್ಳಲಾಗಿರುವ 700 ಖಾಲಿ ಡಬ್ಬಗಳನ್ನು ಹಾಗೂ 200 ಖಾಲಿ ಪ್ಲಾಸ್ಟಿಕ್ ಕ್ಯಾನುಗಳನ್ನು ಇಂದಿನ ಪ್ರಚಲಿತ ಮಾರುಕಟ್ಟೆಯಲ್ಲಿ ಲಭ್ಯ ಬೆಲೆಯಲ್ಲಿ ಬಹಿರಂಗ ಹರಾಜಿನಲ್ಲಿ ಸ್ಥಿರೀಕರಿಸಲಾಗುವ ಮೌಲ್ಯವನ್ನು ಪಡೆದು ಸರ್ಕಾರಕ್ಕೆ ಪಾವತಿಸಿ, ವಿಲೇಗೊಳಿಸಲು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರಿಗೆ ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 25.03.2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 659

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 31/2003-04**

**ಉಪಸ್ಥಿತರು:** ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.
**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ.
**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.
**ಬಾಧ್ಯತೆದಾರರು:** ಯಾರು ಬಂದಿಲ್ಲ.

**ಪ್ರಸ್ತಾವನೆ:**

ದಿನಾಂಕ: 30.01.2004 ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸೊರಬ ತಾಲ್ಲೂಕು ಜಡೆ ಹೋಬಳಿ ಬತ್ತಕಟ್ಟೆ ಗ್ರಾಮದ ಹತ್ತಿರ ವಾಹನ ಹಿಡಿಯಲಾಯಿತು. ಆದರೆ ತಲಗುಂದ ಗ್ರಾಮದ ತಿರುವಿನಲ್ಲಿ ಕಾಯುತ್ತಿರುವಾಗ ಹೊಸೂರು ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚನೆ ನೀಡಿದರು. ನಿಲ್ಲಿಸದೆ ಅತಿ ವೇಗವಾಗಿ ಹೋದಾಗ ಕೂಡಲೇ ಇಲಾಖಾ ವಾಹನದಲ್ಲಿ ಬೆನ್ನಟ್ಟಿಕೊಂಡು ಮೇಲ್ಕಂಡ ಸ್ಥಳದಲ್ಲಿ ನಿಲ್ಲಿಸಿ ಜೋಳದ ಹೊಲದೊಳಗೆ ಓಡಿ ಪರಾರಿಯಾದರು. ವಾಹನ ಟಾಟಾ ಸಿಯೋರಾ ನಂ.ಕೆಎ-19-ಎಂ-1938 ಇದ್ದು, ಕಾರಿನೊಳಗಡೆ 5 ಶ್ರೀಗಂಧದ ತುಂಡುಗಳಿದ್ದು, ಅವುಗಳು ಹಸಿಯಾಗಿದ್ದು ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಶ್ರೀಗಂಧವನ್ನು ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ) ರಿಂದ (ಜಿ), 84, 85, 86 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಮಹಜರ್ ಕ್ರಮ ಜರುಗಿಸಿ ಆನವಟ್ಟಿ ವಲಯದ ಅ.ಮೊ.ಸಂಖ್ಯೆ: 164/2003-04ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 16.02.2004 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿನಾಂಕ: 27.02.2004 ರಂದು ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಜಪ್ತು ಮಾಡಿದ ವಾಹನ ಟಾಟಾ ಸಿಯೋರಾ ನಂ. ಕೆಎ-19-ಎಂ-1938, ಚಾಸ್ಸಿ ನಂಬರ್ 377003957336, ಇಂಜಿನ್ ನಂಬರ್ 483ಡಿಎಲ್41-15-58936 ಆಗಿದ್ದು, ಈ ವಾಹನದಲ್ಲಿದ್ದ 5 ಶ್ರೀಗಂಧದ ತುಂಡು ಒಟ್ಟು ತೂಕ 20 ಕೆ.ಜಿ.ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 16.4.2004 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 660 ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 29/2003-04**

**ಉಪಸ್ಥಿತರು:** ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.
**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ, ನಗರ ವಲಯ.
**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.
**ಬಾಧ್ಯತೆದಾರರು:** ಯಾರು ಬಂದಿಲ್ಲ.

**ಪ್ರಸ್ತಾವನೆ:**

ದಿನಾಂಕ: 26.12.2003 ರಂದು ವಲಯ ಅರಣ್ಯಾಧಿಕಾರಿ, ನಗರ ವಲಯ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಹೊಸನಗರ ತಾಲ್ಲೂಕು ನಗರ ಹೋಬಳಿ ಬೈಸೆ ಗ್ರಾಮದ ದೇವಗಂಗೆ ಬಸ್ ನಿಲ್ದಾಣದ ಹತ್ತಿರ ಕಾಯುತ್ತಿರುವಾಗ ನಗರ ಕೊಲ್ಲೂರಿಗೆ ಹೋಗುವ ರಸ್ತೆಯಲ್ಲಿ ರಾತ್ರಿ ಸುಮಾರು 7.30ರ ಸಮಯದಲ್ಲಿ ಒಂದು ವಾಹನ ದೇವಗಂಗೆ ಕಡೆಯಿಂದ ಬಂದ ಬೈಕ್ ನಿಲ್ಲಿಸಲು ಸೂಚಿಸಿದಾಗ ಟಿವಿಎಸ್ ಸುಜುಕಿ ಬೈಕ್ ಕೆಎ-04-ವಿ-250ನ್ನು ಇಬ್ಬರು ಆಸಾಮಿಗಳು ಅಲ್ಲಿಯೇ ಬಿಟ್ಟು ಕತ್ತಲೆಯಲ್ಲಿ ಓಡಿ ಪರಾರಿಯಾದರು, ಬೆನ್ನಟ್ಟಿದರೂ ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ನಂತರ ಬೈಕಿನಲ್ಲಿದ್ದ ಗೋಣಿ ಚೀಲದಲ್ಲಿ ಸಣ್ಣ ಸಣ್ಣ ಶ್ರೀಗಂಧದ ಚಕ್ಕೆಗಳಿದ್ದು ಅವುಗಳ ಒಟ್ಟು ತೂಕ 12 ಕೆ.ಜಿ. ಇತ್ತು. ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಶ್ರೀಗಂಧವನ್ನು ಜಪ್ತು ಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 84, 86, 87 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಮಹಜರ್ ಕ್ರಮ ಜರುಗಿಸಿ ನಗರ ವಲಯದ ಅ.ಮೊ. ಸಂ.44/2003-04ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 16.02.2004 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ, ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿನಾಂಕ: 26.02.2004 ರಂದು ವನಕ್ರಪ, ಸಾಗರ ವಾರ್ತೆ ಪ್ರಕಟಗೊಂಡು 30 ದಿನಗಳಾದರೂ ಯಾರೂ ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ನಗರ ಇವರು ಜಪ್ತು ಮಾಡಿದ ವಾಹನ ಟಿವಿಎಸ್ ಸುಜುಕಿ ಬೈಕ್ ಕೆಎ-04-ವಿ-250ರ ಚಾಸ್ಸಿ ನಂಬರ್ 7807ಎಫ್068665 ಇಂಜಿನ್ ನಂಬರ್ ಕಾಣಿಸುತ್ತಿಲ್ಲ ಆಗಿದ್ದು, ಈ ವಾಹನದಲ್ಲಿದ್ದ ಶ್ರೀಗಂಧದ ಸಣ್ಣ ಸಣ್ಣ ಚಕ್ಕೆಗಳ ಒಟ್ಟು ತೂಕ 12 ಕೆ.ಜಿ.ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 16.4.2004 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 661

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಅಮೊ. ವಾಹನ. 30/2003-04**

**ಉಪಸ್ಥಿತರು:** ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದುದಾರರು:** ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಸಾಗರ ಗ್ರಾಮಾಂತರ ಠಾಣೆ, ಸಾಗರ.

**ಆರೋಪಿಗಳು:** ಶ್ರೀ ಕೇಶವ್ ಜೋಗಿ

**ಬಾಧ್ಯತೆದಾರರು:** ಯಾರು ಬಂದಿಲ್ಲ.

**ಪ್ರಸ್ತಾವನೆ:**

ದಿನಾಂಕ: 14.01.2004 ರಂದು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಮತ್ತು ಸಿಬ್ಬಂದಿ ಸಾಗರ ಗ್ರಾಮಾಂತರ ಪೊಲೀಸ್ ಠಾಣೆ, ಸಾಗರ ಇವರುಗಳು ಸಿಗಂದೂರು ಚೌಡೇಶ್ವರಿ ಜಾತ್ರೆಯ ಬಂದೋಬಸ್ತ್ ಕಾರ್ಯವನ್ನು ಹೊಳೆಬಾಗಿಲಲ್ಲಿ ಮುಗಿಸಿಕೊಂಡು ಬರುತ್ತಿರುವಾಗ ಬೇಸೂರು ಹತ್ತಿರದ ರಸ್ತೆಯಲ್ಲಿ ಮೋಟಾರ್ ಬೈಕಿನಲ್ಲಿ ಬಂದ ಅಪರಿಚಿತರು ಹಿಂದೆ ಗಂಧದ ಕಾರು ಪೊಲೀಸಿನವರು ಹಿಡಿದಿರುತ್ತಾರೆಂದು ತಿಳಿಸಿದ ಮೇರೆಗೆ ಜಿಎ-02-ಎ2824 ಮಾರುತಿ ವ್ಯಾನಿನಲ್ಲಿ ಶ್ರೀಗಂಧವಿರುವುದನ್ನು ಪರಿಶೀಲಿಸಲು ಬಂದಾಗ 3 ಜನ ಆಸಾಮಿಗಳು ಕಾಡಿನೊಳಗೆ ಓಡಿ ಹೋಗಿ ಪರಾರಿಯಾಗಿರುತ್ತಾರೆ. ನಂತರ ಕಾರನ್ನು ಪರಿಶೀಲಿಸಿ 4 ಗೋಣಿ ಚೀಲದಲ್ಲಿ ಬಾಯಿ ಕಟ್ಟಿದ್ದು, 2 ಪ್ಲಾಸ್ಟಿಕ್

ಗೊಬ್ಬರದ ಚೀಲದಲ್ಲಿ ಬಾಯಿಕಟ್ಟಿ ಶ್ರೀಗಂಧದ ಚಕ್ಕೆ, ಬೇರುಗಳನ್ನು ತುಂಬಿದನ್ನು ನೋಡಿ ಓಡಿ ಹೋದ 3 ಜನರ ಆಸಾಮಿಗಳ ಪೈಕಿ ಒಬ್ಬನು ಕೇಶವ್ ಜೋಗಿ, ಇನ್ನುಳಿದವರು ಅಪರಿಚಿತರಾಗಿರುತ್ತಾರೆ. ಈ ಶ್ರೀಗಂಧವನ್ನು ಸಾಗಿಸಲು ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಶ್ರೀಗಂಧವನ್ನು ಜಪ್ತು ಮಾಡಿ ಐಪಿಸಿ ಕಲಂ 379, 411 ಆರ್/ಡಬ್ಲ್ಯೂ ಐಪಿಸಿ ಮತ್ತು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 86, 87, 71(ಎ)ರ ಪ್ರಕಾರ ಮಹಜರ್ ಕ್ರಮ ಜರುಗಿಸಿ ಪೊಲೀಸ್ ಗ್ರಾಮಾಂತರ ಠಾಣೆ, ಸಾಗರ ಇವರ ಕಛೇರಿ ಗುನ್ನೆ ನಂ.14/2004 ದಿನಾಂಕ: 14.1.2004 ನ್ನು ದಾಖಲಿಸಿ ನಂತರ ಶ್ರೀಗಂಧ ಮತ್ತು ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಶ್ರೀಗಂಧ ಮತ್ತು ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 16.02.2004 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ, ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿನಾಂಕ: 26.02.2004 ರಂದು ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಸಬ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್, ಸಾಗರ ಗ್ರಾಮಾಂತರ ಠಾಣೆ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಜಿಎ-02-ಎ-2824, ಚಾಸ್ಸಿ ನಂಬರ್ ಕಾಣಿಸುತ್ತಿಲ್ಲ. ಇಂಜಿನ್ ನಂಬರ್ ಕಾಣಿಸುತ್ತಿಲ್ಲ. ಆಗಿದ್ದು, ಈ ವಾಹನದಲ್ಲಿ 4 ಗೋಣಿ ಚೀಲ ಮತ್ತು 3 ಪ್ಲಾಸ್ಟಿಕ್ ಚೀಲದಲ್ಲಿದ್ದ ಶ್ರೀಗಂಧದ ಸಣ್ಣ ಸಣ್ಣ ಚಕ್ಕೆ ಮತ್ತು ಬೇರು ಸೇರಿದಂತೆ 200 ಕೆ.ಜಿ.ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ವಾಹನದ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 16.4.2004 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 662

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ಉಪ ನಿರೀಕ್ಷಕರು, | ಎನ್. ಮಹೇಶ್ ಬಿನ್ ನಂಜುಂಡಸ್ವಾಮಿ, ಕಾಡುಕೊತ್ತನಹಳ್ಳಿ, |
| ಮದ್ದೂರು ಉಪವಲಯ. | ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು (ಪಿಎ, ಹೋಲ್ಡರ್) |

ದಿನಾಂಕ: 4.3.2003 ರಂದು ಸಾಯಂಕಾಲ 5.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪ ವಲಯ - ರವರು ಮದ್ದೂರು ತಾಲ್ಲೂಕು ಸಬ್ಬಹಳ್ಳಿ - ಯಡಗನಹಳ್ಳಿ ರಸ್ತೆಯ ಮಧ್ಯೆ ವಿ.ಸಿ. ನಾಲೆಯ ಕಡಿಲುವಾಗಿಲುವಿಗೆ ಹೋಗುವ ಸೇತುವೆ ತಿರುವಿನಲ್ಲಿ ವಾಹನ ಕವಾಸಕಿ ಬಜಾಜ್ ಸಂಖ್ಯೆ: ಕೆಎ-11/ಹೆಚ್-3930 ರಲ್ಲಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 116/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ) ಮತ್ತು 43 ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಮದ್ದೂರು ವಲಯರವರು ದಿನಾಂಕ: 23.4.2004 ರಂದು ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಸಾಧನೆ ಮಾಡಲು ವಾರಸುದಾರರು ಇದುವರೆವಿಗೂ ಬಾರದೆ ಇರುವುದರಿಂದ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ 'ಬಿ' ವಹಿಯ ರೀತ್ಯಾ ಶ್ರೀ ಸುಬ್ರಹ್ಮಣ್ಯ ಬಿನ್ ಚಿಕ್ಕರಾಮಯ್ಯ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್ ನೀಡಲಾಗಿ, ಸದರಿ ವ್ಯಕ್ತಿಯು ಕೆಲಸದ ನಿಮಿತ್ತ ಮಧುರೆಗೆ ಹೋಗಿರುವುದಾಗಿ, ಅಬಕಾರಿ ನಿರೀಕ್ಷಕರು ತಿಳಿಸಿರುತ್ತಾರೆ.

ಶ್ರೀ ಸುಬ್ರಹ್ಮಣ್ಯ - ಇವರ ಪಿಎ ಹೋಲ್ಡರ್‌ರವರಾದ ಎನ್. ಮಹೇಶ್ - ಇವರು ವಕೀಲರ ಮುಖೇನ ದಿನಾಂಕ: 16.10.2003 ರಂದು ಮನವಿಯನ್ನು ಸಲ್ಲಿಸಿ, ಸೂಕ್ತ ಭದ್ರತೆ ಪಡೆದು, ತಾತ್ಕಾಲಿಕವಾಗಿ ತನ್ನ ವಶಕ್ಕೆ ವಾಹನವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆದ ಮದ್ಯಸಾರದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ, ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಆದ್ದರಿಂದ ವಶಪಡಿಸಿಕೊಂಡ 8.640 ಲೀ. ಮದ್ಯವನ್ನು ದಿನಾಂಕ: 28.11.2003 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಹನ್ನೆರಡು (12) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/564/02-03, ದಿನಾಂಕ: 10ನೇ ಮಾರ್ಚ್ 2004**

ವಿ.ಸಿ. ರಾಜಣ್ಣ, ಅಬಕಾರಿ ಅಧೀಕ್ಷಕರು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪ ವಲಯ - ರವರ ಪ್ರ.ಮಾ.ವ. ಸಂಖ್ಯೆ: 116/2002-03, ದಿನಾಂಕ: 4.3.2003 ರಲ್ಲಿ ವಶಪಡಿಸಿಕೊಂಡ ವಾಹನ ಕವಾಸಕಿ ಬಜಾಜ್ ಸಂಖ್ಯೆ: ಕೆಎ-11/ಹೆಚ್-3930ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 663 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

| ಫಿರ್ಯಾದುದಾರರು | ಪ್ರತಿವಾದಿಗಳು |
|---|---|
| ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪವಲಯ. | 1) ಮಹದೇವು ಬಿನ್ ಬೋರಣ್ಣ, ದೇವರಹಳ್ಳಿ ಗ್ರಾಮ, ಮದ್ದೂರು ತಾಲ್ಲೂಕು.<br>2) ನಾಗರಾಜು ಬಿನ್ ನಿಂಗೇಗೌಡ, ಮಾರಿಗುಡಿ ರಸ್ತೆ, ದೇವರ ಹಳ್ಳಿ ಗ್ರಾಮ, ಮದ್ದೂರು ತಾಲ್ಲೂಕು.<br>3) ಎ.ಎನ್. ಉಮೇಶ್, ಆಲಬೂಜನಹಳ್ಳಿ, ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು.<br>4) ನವೀನ್ ಕುಮಾರ್ ಬಿನ್ ಕೆಂಪೇಗೌಡ ಅಲಿಯಾಸ್ ಚಿಕ್ಕಣ್ಣ, ದೇವರಹಳ್ಳಿ ಗ್ರಾಮ, ಮದ್ದೂರು ತಾಲ್ಲೂಕು.<br>5) ಜಯರಾಮ್ ಬಿನ್ ಮುನೇಗೌಡ, ಮುದುಲೂರು ಪೋಸ್ಟ್, ಚನ್ನಪಟ್ಟಣ ತಾಲ್ಲೂಕು. |

ದಿನಾಂಕ: 23.2.2003 ರಂದು ಮಧ್ಯಾಹ್ನ 2.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು ಮದ್ದೂರು ಉಪವಲಯ ರವರು ಮದ್ದೂರು ತಾಲ್ಲೂಕಿನ ಸಿ.ಎ.ಕೆರೆ ಹೋಬಳಿ, ಹೊಲದ ಮಧ್ಯದಲ್ಲಿರುವ ಮನೆಯಲ್ಲಿ ಅಕ್ರಮವಾಗಿ (8X48) ರಟ್ಟಿನ ಪೆಟ್ಟಿಗೆಗಳು, ವಾಹನ ಬಜಾಜ್ ಚೇತಕ್ ಸ್ಕೂಟರ್ ಕೆಎ-05/ಎಲ್5213 ರಲ್ಲಿ 48 ಬಾಟಲ್ ಒರಿಜಿನಲ್ ಚಾಯ್ಸ್ ವಿಸ್ಕಿ ನಕಲಿ ಮದ್ಯ ತಯಾರಿಕೆಗೆ ಬಳಸುವ ಅಡ್‌ಸೀವ್ ಲೇಬಲ್‌ಗಳು, ಕಾರ್ಕ್‌ಗಳು ಮತ್ತು ಸುಮಾರು 20 ಲೀ. ಸಾಮರ್ಥ್ಯವುಳ್ಳ ಒಂದು ಕ್ಯಾನ್‌ನಲ್ಲಿ 15 ಲೀ. ನಕಲಿ ಮದ್ಯವನ್ನು ದಾಸ್ತಾನು ಮಾಡಿದ ಬಗ್ಗೆ - ವಾಹನ ಮತ್ತು ಅಬಕಾರಿ ವಸ್ತುಗಳನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 115/02-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 37, 38(ಎ) ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆದ ಮದ್ಯಸಾರದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ, ಸದರಿ ಮದ್ಯವು i) Presence of Ethly Alchohol was detected in the above stated bottels, at Sl.No. 1, 3 & 5 and they do not conforms to the bureau of Indian Standard ii) Presence of ethyl alcohol was detected in the above stated bottles at Sl.No. 2 & 4 and they are fit for human consumption ಎಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಾಧಿಕಾರದಿಂದ ದಿನಾಂಕ: 23.4.2003 ರಂದು ಆರೋಪಿಗೆ ಮತ್ತು ವಾಹನ 'ಬಿ' ವಹಿಯ ರೀತ್ಯಾ ದಿನಾಂಕ: 18.9.2003 ರಂದು ವಾಹನ ಮಾಲೀಕರಾದ ವಾಹನ ಶ್ರೀ ಜಯರಾಮ್ ಬಿನ್ ಮುನೇಗೌಡ, ಮುದಲೂರು ಅಂಚೆ ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಬಿ) ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿ ವಿಳಾಸವಿಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿದ್ದಾರೆ.

ನವೀನ್ ಕುಮಾರ್ - ಇವರು ವಕೀಲರ ಮುಖೇನ ದಿನಾಂಕ: 27.5.2003 ರಂದು ಮನವಿಯನ್ನು ಸಲ್ಲಿಸಿ, ಸೂಕ್ತ ಭದ್ರತೆಪಡೆದು, ತಾತ್ಕಾಲಿಕವಾಗಿ ತನ್ನ ವಶಕ್ಕೆ ವಾಹನವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ಇವರ ವರದಿ ಸಂಖ್ಯೆ: ಆರ್.ಸಿ.ಆರ್.137/02-03, ದಿನಾಂಕ: 9.6.2003 ರಲ್ಲಿ ವರದಿಯನ್ನು ಸಲ್ಲಿಸಿ, ವಶಪಡಿಸಿಕೊಂಡ ವಾಹನ ಮತ್ತು ಅಬಕಾರಿ ವಸ್ತುಗಳು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕು

ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ ಸದರಿ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯನ್ನು ಆಧರಿಸಿ ದಿನಾಂಕ: 6.12.2003 ರಂದು (ಮಾದರಿಯನ್ನು ಹೊರತುಪಡಿಸಿ) 101.400 ಲೀ. ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸದರಿ ಮದ್ಯವು i) Presence of Ethyl Alcohol was detected in the above stated bottels, at Sl.No. 1, 3 & 5 and they do not conforms to the bureau of Indian Standard ii) Presence of ethyl alcohol was detected in the above stated bottles at Sl.No. 2 & 4 and they are fit for human consumption ಎಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 101.400 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಒಂದು ವರ್ಷ ಒಂದು (1) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/542/02-03, ದಿನಾಂಕ: 18ನೇ ಮಾರ್ಚ್ 2004**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮದ್ದೂರು ಉಪ ವಲಯ - ರವರ ಪ್ರ.ಮಾ.ವ. ಸಂಖ್ಯೆ: 115/2002-03, ದಿನಾಂಕ: 23.2.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ-05/ಎಲ್ 5213 (ಚಾರ್‌ಸಿ ನಂ.06ಇ94ಎಫ್54792, ಇಂಜಿನ್ ನಂ:06ಇ924ಎಫ್59115) ನ್ನು ಮತ್ತು ಮದ್ಯವನ್ನು ಹೊರತುಪಡಿಸಿ, ನಕಲಿ ಮದ್ಯ ತಯಾರು ಮಾಡುವ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 664 ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

| **ಫಿರ್ಯಾದುದಾರರು** | | **ಪ್ರತಿವಾದಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು, ನಂ.7 ರಾಜ್ಯ ವಿಚಕ್ಷಣ ದಳ, ಬೆಂಗಳೂರು | 1) | ರಾಜಾ ಬಿನ್ ವೆಂಕಟೇಶಪ್ಪ, ನಂ.113, 4ನೇ ತಿರುವು, ಮಾರತ್‌ಹಳ್ಳಿ, ಸಂಜಯನಗರ, ಬೆಂಗಳೂರು. |
| | 2) | ರಮೇಶ್ ಬಿನ್ ರಾಜೂಗೌಡ, ಸೌಂದರಹಳ್ಳಿ, ಶಾಂತಿಗ್ರಾಮ, ಹಾಸನ ತಾಲ್ಲೂಕು. |
| | 3) | ಸತೀಶ್ ಬಿನ್ ತಿಮ್ಮೇಗೌಡ, ಚನ್ನಪಟ್ಟಣ, ಹಾಸನ ತಾಲ್ಲೂಕು. |
| | 4) | ಬಿ. ನಾಗರಾಜಪ್ಪ ಬಿನ್ ಭೈರಪ್ಪ, ನಂ141/1, ಬಿಎಂಎಲ್ ಲೇಔಟ್, ಕಮಲನಗರ, ಬಸವೇಶ್ವರನಗರ ಬೆಂಗಳೂರು - 79 (ವಾಹನ ಮಾಲೀಕರು). |

ದಿನಾಂಕ: 21.9.2004 ರಂದು ಬೆಳಿಗ್ಗೆ 4.00 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ನಂ.7, ರಾಜ್ಯ ವಿಚಕ್ಷಣ ದಳ, ಬೆಂಗಳೂರು-ರವರು ಕೆ.ಆರ್. ಪೇಟೆ ಟೌನ್, ಟಿ.ಬಿ. ಸರ್ಕಲ್, ಬಸ್ ತಂಗುದಾಣದ ಬಳಿ ವಾಹನ ಎಲ್‌ಎಂವಿ ಮಾಕ್ಸಿಕ್ಯಾಬ್ ಸಂಖ್ಯೆ: ಕೆಎ-02/ಎ-486 (ಚಾರ್‌ಸಿ ನಂ:616ಎಫ್‌ಡಿ748823ಹೆಚ್95, ಇಂಜಿನ್ ನಂ:616969124461) ರಲ್ಲಿ 35 ಲೀ. ಸಾಮರ್ಥ್ಯದ 24 ಬಿಳಿ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 35 ಲೀ. ನಂತೆ ಒಟ್ಟು 840.000 ಲೀ. ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯಸಾರವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 11/2003-04 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 38(ಎ) ಮತ್ತು 43 ರಂತೆ ಕ್ರಮ ಜರುಗಿಸಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆದ ಮದ್ಯಸಾರದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ, ಸದರಿ ಮದ್ಯಸಾರವು Presence of Ethyl Alcohal was detected in the above stated bottle, they are fit for potable purpose ಎಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಅಬಕಾರಿ ನಿರೀಕ್ಷಕರು, ಕೆ.ಆರ್. ಪೇಟೆ ವಲಯ ರವರು ವಶಪಡಿಸಿಕೊಂಡ ವಾಹನದ 'ಬಿ' ವಹಿಯನ್ನು ಲಗತ್ತಿಸಿ, ಮದ್ಯಸಾರವನ್ನು ಕಛೇರಿಯಲ್ಲಿ ಇಟ್ಟುಕೊಳ್ಳಲು ಸಾಧ್ಯವಿಲ್ಲದ ಕಾರಣ ಸಾರಾಯಿ ತಯಾರಿಕೆಗೆ ಮೈಷುಗರ್ ಕಂಪನಿ, ಮಂಡ್ಯ ಇವರಿಗೆ ದಿನಾಂಕ: 12.11.2003ರ ವರದಿಯಲ್ಲಿ ಕೋರಿರುತ್ತಾರೆ. ಇವರ ವರದಿಯಂತೆ, ಸದರಿ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೆ: ಮೈಷುಗರ್ ಕಂಪನಿ, ಮಂಡ್ಯ - ಇವರಿಗೆ ಸಾರಾಯಿ ತಯಾರಿಕೆಗೆ ಉಪಯೋಗಿಸಿಕೊಳ್ಳಲು ದಿನಾಂಕ: 24.11.2003ರ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ಡಿ. ನಾಗರಾಜಪ್ಪ - ಇವರು ವಕೀಲರ ಮುಖೇನ ದಿನಾಂಕ: 8.12.2003 ರಂದು ಮನವಿಯನ್ನು ಸಲ್ಲಿಸಿ, ಸೂಕ್ತ ಭದ್ರತೆ ಪಡೆದು, ತಾತ್ಕಾಲಿಕವಾಗಿ ತನ್ನ ವಶಕ್ಕೆ ವಾಹನವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಈ ಪ್ರಾಧಿಕಾರದಿಂದ ದಿನಾಂಕ: 17.12.2003 ರಂದು ಆರೋಪಿತನಿಗೆ ಮತ್ತು ವಾಹನ ಮಾಲೀಕರಿಗೆ ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಬಿ) ಅಡಿಯಲ್ಲಿ

ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿ ವಿಳಾಸದಲ್ಲಿಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿದ್ದಾರೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸದರಿ ಮದ್ಯಸಾರವು Presence of Ethyl Alcohal was detected in the above stated bottle, they are fit for potable purpose ಎಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 840 ಲೀ. ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಆರು (6) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/121/03-04, ದಿನಾಂಕ: 18ನೇ ಮಾರ್ಚ್ 2004**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ನಿರೀಕ್ಷಕರು, ನಂ.7, ರಾಜ್ಯ ವಿಚಕ್ಷಣ ದಳ, ಬೆಂಗಳೂರು - ರವರ ಪ್ರ.ಮಾ.ವ. ಸಂಖ್ಯೆ: 11/2003-04, ದಿನಾಂಕ: 21.9.2003 ರಲ್ಲಿ ವಶಪಡಿಸಿಕೊಂಡ ವಾಹನ ಎಲ್‌ಎಂವಿ ಮಾಕ್ಸಿಕ್ಯಾಬ್ ಸಂಖ್ಯೆ: ಕೆಎ-02/ಎ-486 (ಚಾರ್‌ಸಿ ನಂ:616ಎಫ್‌ಡಿ748823ಹೆಚ್95, ಇಂಜಿನ್ ನಂ:616969124461) ನ್ನು ಮತ್ತು ಮದ್ಯಸಾರವನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಎಸ್. ಅನಂತು

ಪಿ.ಆರ್. 665 ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಹುಬ್ಬಳ್ಳಿ ಇವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ:**
1) ಉಪ ಕೃಷಿ ನಿರ್ದೇಶಕರು, ಧಾರವಾಡ ಜಿಲ್ಲೆ, ಇವರ ಪತ್ರ ಸಂಖ್ಯೆ: ಸಿ-1:ಸಿಆರ್.26:ವಿಚಾರಣೆ:2000-01, ದಿನಾಂಕ: 6.2.2001.
2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರ ಆದೇಶ ಸಂಖ್ಯೆ: ಧಾ.ಜಿ.ಪಂ:ಉಕಾಸಿ-6:ಸಿಆರ್:902:2000-01:5819, ದಿನಾಂಕ: 6.2.2001.
3) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರ 2ನೇ ಸೂಚನಾ ಪತ್ರದ ಕ್ರ.ಸಂಖ್ಯೆ: ಧಾಜಿಪಂ:ಉಕಾ:ಸಿ.7:ಸಿಆರ್-475:2000-01, ದಿನಾಂಕ: 9.4.2002.
4) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಕಾರ್ಯಾಲಯದ ಪತ್ರ ಸಂಖ್ಯೆ: ಧಾಜಿಪಂ:ಉಕಾ:ಸಿ.7: ಸಿಆರ್:475: 2000-01, ದಿನಾಂಕ: 16.2.2002.
5) ಈ ಕಛೇರಿಯ ಅಂತಿಮ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-7:21:2000-01, ದಿನಾಂಕ: 25.8.2003.
6) ಸಂಯುಕ್ತ ಕರ್ನಾಟಕ ದಿನಪತ್ರಿಕೆ ದಿನಾಂಕ: 20.3.2003 ಮತ್ತು ಹುಬ್ಬಳ್ಳಿ ಸಂಜೆವಾಣಿ ಪತ್ರಿಕೆ ದಿನಾಂಕ: 7.12.2003 ರಂದಿನ ಪತ್ರಿಕಾ ಪ್ರಕಟಣೆಗಳು.

**ಪ್ರಸ್ತಾವನೆ:**

ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಹುಬ್ಬಳ್ಳಿ ಇವರ ವ್ಯಾಪ್ತಿಯಲ್ಲಿನ ವರೂರು ವೃತ್ತದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಪಾಲಿಕೊಪ್ಪ ಗ್ರಾಮದ 16 ಜನ ರೈತರು ಹಾಗೂ ತಿರುಮಲಕೊಪ್ಪ ಗ್ರಾಮದ ಒಬ್ಬ ರೈತರಿಂದ ಕೃಷಿ ಪರಿಕರಗಳನ್ನು ಕೊಡಿಸುವುದಾಗಿ ರೂ.67070-00 ನ್ನು ಪಡೆದುಕೊಂಡು ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಸಹಾಯಕ ಕೃಷಿ ನಿರ್ದೇಶಕರು, ಹುಬ್ಬಳ್ಳಿ ಇವರು ನೀಡಲಾದ ವರದಿಯನ್ನು ಆಧರಿಸಿ ಉಪ ಕೃಷಿ ನಿರ್ದೇಶಕರು, ಧಾರವಾಡ ಇವರು ಸಹಾಯಕ ಕೃಷಿ ನಿರ್ದೇಶಕರು, ಧಾರವಾಡ ಇವರನ್ನು ಪ್ರಕರಣದ ತನಿಖೆ ಮಾಡಿ ವರದಿ ಸಲ್ಲಿಸುವಂತೆ ಸೂಚಿಸಿದ್ದರು. ಪ್ರಕರಣದ ತನಿಖೆಯನ್ನು ಸಹಾಯಕ ಕೃಷಿ ನಿರ್ದೇಶಕರು ಧಾರವಾಡ ಇವರು ದಿನಾಂಕ: 17.1.2001 ರಂದು ಕೈಗೊಂಡು ದಿನಾಂಕ: 6.2.2001 ರಂದು ತನಿಖಾ ವರದಿಯನ್ನು ಸಲ್ಲಿಸಿದ್ದರು. ತನಿಖಾ ವರದಿಯನ್ನು ಪರಿಶೀಲಿಸಿದ ಉಪ ಕೃಷಿ ನಿರ್ದೇಶಕರು, ಧಾರವಾಡ ಇವರು ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕ ಇವರು ಶೇಂಗಾ ದೊಡ್ಡ ಪ್ರಾತ್ಯಕ್ಷಿಕೆಗೆ ಹಾಗೂ ಇನ್ನಿತರ ಕೃಷಿ ಪರಿಕರಗಳಿಗಾಗಿ 17 ಮಂದಿ ರೈತರಿಂದ ಒಟ್ಟು ರೂ.67070-00 ಪಡೆದುಕೊಂಡು ದುರುಪಯೋಗ ಪಡಿಸಿಕೊಂಡ ಆರೋಪವು ಮೇಲುನೋಟಕ್ಕೆ ಕಂಡುಬಂದ ಪ್ರಯುಕ್ತ ಓದಲಾದ (1) ರಲ್ಲಿನ ಪತ್ರದ ಮುಖಾಂತರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಧಾರವಾಡ ಇವರಿಗೆ ಪ್ರಸ್ತಾವನೆ ಸಲ್ಲಿಸಿ ಸದರಿ ಕೃಷಿ ಸಹಾಯಕರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ಕೋರಿದ್ದರು. ಪ್ರಸ್ತಾವನೆಯನ್ನು ಪರಿಶೀಲಿಸಿದ ಮುಖ್ಯ ಕಾರ್ಯನಿರ್ವಾಹಕರು, ಜಿಲ್ಲಾ ಪಂಚಾಯತ್ ಧಾರವಾಡ ಇವರು ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕರನ್ನು ಓದಲಾದ (2)ರ ಆದೇಶದಲ್ಲಿ ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆಯನ್ನು ಬಾಕಿ ಇಟ್ಟು ಅಮಾನತ್ತಿನಲ್ಲಿಟ್ಟಿದ್ದರು, ಇವರ ವಿರುದ್ಧದ ಆರೋಪಗಳ ಬಗ್ಗೆ ದೋಷಾರೋಪಣಾ

ಪಟ್ಟಿಗಳನ್ನು ಅನುಬಂಧ-1 ರಿಂದ 4 ರವರೆವಿಗೆ ತಯಾರಿಸಿ ದಿನಾಂಕ: 14.3.2001ರ ಪತ್ರದ ಮುಖೇನ ಜಾರಿಗೊಳಿಸಿ ಆರೋಪಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಬಗ್ಗೆ ಪ್ರತಿವಾದವನ್ನು ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಲಾಯಿತು. ದೋಷಾರೋಪಣಾ ಪಟ್ಟಿಗಳನ್ನು ಪಡೆದ ಆರೋಪಿತರು ನಿಗದಿತ ಸಮಯ ಕಳೆದರೂ ಸಹ ಪ್ರತಿವಾದವನ್ನು ಸಲ್ಲಿಸಿರುವುದಿಲ್ಲ. ಇವರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ವಿಚಾರಣಾಧಿಕಾರಿಗಳನ್ನು ಹಾಗೂ ಮಂಡನಾಧಿಕಾರಿಗಳನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ದಿನಾಂಕ: 3.10.2001ರ ಆದೇಶದಲ್ಲಿ ನೇಮಕಾತಿ ಮಾಡಿ ಆದೇಶಿಸಿದ್ದರು. ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11 ರಡಿಯಲ್ಲಿನ ನಿಯಮಾನುಸಾರವಾಗಿ ಪ್ರಕರಣದ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಆರೋಪಿತರ ವಿರುದ್ಧದ ರೂ.67070-00ರ ಹಣ ದುರುಪಯೋಗದ ಆರೋಪವು ಸಾಬೀತಾಗಿರುತ್ತದೆ. ಇವರ ವಿರುದ್ಧದ ಆರೋಪವು ಸಾಬೀತಾದ ಹಿನ್ನೆಲೆಯಲ್ಲಿ ವಿಚಾರಣಾ ವರದಿಯ ಪ್ರತಿಯನ್ನು ಓದಲಾದ (3) ರಲ್ಲಿನ ಸೂಚನಾ ಪತ್ರದೊಂದಿಗೆ ಆರೋಪಿತರಿಗೆ ಜಾರಿಗೊಳಿಸಲು ರವಾನಿಸಲಾಗಿತ್ತು. ಆಪಾದಿತ ನೌಕರರ ಹಾಗೂ ಅವರ ಸಂಬಂಧಿಗಳ ಸುಳಿವು ಸಿಕ್ಕದ ಕಾರಣ ಸೂಚನಾ ಪತ್ರ ಹಾಗೂ ವಿಚಾರಣಾ ವರದಿಯು ಮರಳಿ ಹಿಂದಿರುಗಿ ಬಂದಿರುತ್ತದೆ. ಆರೋಪಿತರ ವಿರುದ್ಧದ ಆರೋಪವು ಸಾಬೀತಾದ ಹಿನ್ನೆಲೆಯಲ್ಲಿ ದಂಡನೆ ವಿಧಿಸುವಂತೆ ಕೋರಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರು ಓದಲಾದ (4)ರ ಪತ್ರದ ಮುಖೇನ ಇಲಾಖೆಗೆ ವರದಿ ಮಾಡಿ ಪ್ರಸ್ತಾವನೆ ಸಲ್ಲಿಸಿದ್ದರು. ವಿಚಾರಣಾ ವರದಿಯ ಪ್ರತಿಯನ್ನು ಈ ಕಛೇರಿಯ ಸೂಚನಾ ಪತ್ರ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-7:21: 2000-01, ದಿನಾಂಕ: 22.1.2003 ರಲ್ಲಿ ಜಂಟಿ ಕೃಷಿ ನಿರ್ದೇಶಕರು, ಧಾರವಾಡ ಇವರಿಗೆ ರವಾನಿಸಿ ಸಿಸಿಎ ನಿಯಮ 1957ರ ನಿಯಮ 28-ಎ ಅಡಿಯಲ್ಲಿನ ಅವಕಾಶಗಳ ಅನುಸಾರವಾಗಿ ಜಾರಿಗೊಳಿಸಲು ಸೂಚಿಸಲಾಯಿತು. ಅಂತಿಮವಾಗಿ ದಿನಾಂಕ: 20.3.2003 ರಂದಿನ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ: 22.1.2003ರ ಈ ಕಛೇರಿಯ ಸೂಚನಾ ಪತ್ರವು ಪ್ರಕಟವಾಗಿದ್ದು, ಅದರಂತೆ ದಂಡನೆ ವಿಧಿಸುವ ಬಗ್ಗೆ ಹೇಳಿಕೆ ಸಲ್ಲಿಸುವಂತೆ ಆರೋಪಿತರಿಗೆ ಸೂಚಿಸಲಾಯಿತು. ಆದರೂ ಆರೋಪಿತರು ಹೇಳಿಕೆ ಸಲ್ಲಿಸಿರುವುದಿಲ್ಲ. ಶಿಸ್ತು ಪ್ರಾಧಿಕಾರವು ಆರೋಪಿತರಿಗೆ ಮತ್ತೊಂದು ಅವಕಾಶ ನೀಡಲು ನಿರ್ಧರಿಸಿ ಓದಲಾದ (5) ರಲ್ಲಿನ ಅಂತಿಮ ಸೂಚನಾ ಪತ್ರವನ್ನು ಹೊರಡಿಸಿ ಇದನ್ನು ಎರಡು ಪ್ರಮುಖ ದಿನಪತ್ರಿಕೆಗಳಲ್ಲಿ ಪ್ರಕಟಿಸುವಂತೆ ಕೋರಿ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬಿ.ಎಂ.ಟಿ.ಸಿ. ಬಸ್ ನಿಲ್ದಾಣ, ಶಿವಾಜಿನಗರ, ಬೆಂಗಳೂರು ಇವರನ್ನು ಕೋರಲಾಯಿತು. ಅಂತೆಯೇ ಅಂತಿಮ ಸೂಚನಾ ಪತ್ರವು ಹುಬ್ಬಳ್ಳಿ ಸಂಜೆವಾಣಿ ದಿನಪತ್ರಿಕೆಯಲ್ಲಿ ದಿನಾಂಕ: 7.12.2003 ರಂದು ಪ್ರಕಟವಾಗಿತ್ತು. ಈ ಆದೇಶದ ದಿನದವರೆವಿಗೂ ಆರೋಪಿತರಿಂದ ಯಾವುದೇ ಹೇಳಿಕೆ ಬಾರದಿರುವುದರಿಂದ ಈ ಕೆಳಕಂಡ ದಂಡನಾದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1:ವಿಚಾರಣೆ-7:21:2000-01, ದಿನಾಂಕ: 29ನೇ ಮಾರ್ಚ್ 2004**

ಈ ಕೆಳಗೆ ಸಹಿ ಮಾಡಿರುವ ಕೃಷಿ ನಿರ್ದೇಶಕರಾದ ಶ್ರೀ ಜಿ. ಪ್ರಕಾಶ ಆದ ನಾನು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಹುಬ್ಬಳ್ಳಿ ವ್ಯಾಪ್ತಿಯಲ್ಲಿನ ವರೂರು ವೃತ್ತ ಇವರನ್ನು ಆರೋಪಿ ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಹುಬ್ಬಳ್ಳಿ ವ್ಯಾಪ್ತಿಯಲ್ಲಿನ ವರೂರು ವೃತ್ತ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 1957ರ ನಿಯಮ 8(vi)ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿರುತ್ತೇನೆ.

ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕರು ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದೇ ಪರಿಗಣಿಸಲು ಆದೇಶಿಸಿರುತ್ತೇನೆ.

ಶ್ರೀ ಮಹಮದ್ ಸಕ್ಲೇನ್, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಹುಬ್ಬಳ್ಳಿ ವ್ಯಾಪ್ತಿಯಲ್ಲಿನ ವರೂರು ವೃತ್ತ ಇವರು 2000-2001ನೇ ಸಾಲಿನಲ್ಲಿನ ಬೇಸಿಗೆ ಹಂಗಾಮಿನಲ್ಲಿ ಶೇಂಗಾ ಪ್ರಾತ್ಯಕ್ಷಿಕೆ ಕೈಗೊಳ್ಳಲು ಬೇಕಾದ ಪರಿಕರಗಳನ್ನು ಶೇ.50ರ ರಿಯಾಯಿತಿ ದರದಲ್ಲಿ ಕೊಡಿಸುವುದಾಗಿ ಸುಳ್ಳು ಹೇಳಿ ವಂಚಿಸಿ 17 ಮಂದಿ ರೈತರಿಂದ ಪಡೆದ ಹಣ ರೂ.67070-00ನ್ನು ಪಡೆದ ಬಗ್ಗೆ ವರದಿ ಸಲ್ಲಿಸಿದ ಮಾಹೆ ಜನವರಿ 2001 ರಿಂದ ಶೇ.12ರ ಬಡ್ಡಿ ಸಹಿತ ಇವರ ಕಡ್ಡಾಯ ನಿವೃತ್ತಿಯಿಂದ ಬರುವ ಆರ್ಥಿಕ ಸೌಲಭ್ಯಗಳಾದ ಡಿ.ಸಿ.ಆರ್.ಜಿ., ರಜೆ ವೇತನ ಇನ್ನಿತರ ಆರ್ಥಿಕ ಸೌಲಭ್ಯಗಳಿಂದ ಕಡಿತಗೊಳಿಸಿ ಜಂಟಿ ಕೃಷಿ ನಿರ್ದೇಶಕರು, ಧಾರವಾಡ ಹಾಗೂ ಸಹಾಯಕ ಕೃಷಿ ನಿರ್ದೇಶಕರು, ಹುಬ್ಬಳ್ಳಿ ಇವರ ಮುಖಾಂತರ ವಂಚನೆಗೊಳಗಾದ 17 ಮಂದಿ ರೈತರಿಗೆ ಅವರವರಿಗೆ ಸಲ್ಲಬೇಕಾದ ಹಣವನ್ನು ಹಿಂದಿರುಗಿಸಿ ಪಾವತಿಸಲು ಆದೇಶಿಸಿರುತ್ತೇನೆ.

**ಜಿ. ಪ್ರಕಾಶ**

ಪಿ.ಆರ್. 666 ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು.

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಮುತ್ತುಗದಹಳ್ಳಿ ಸಾಮೂಹಿಕ ಬೇಸಾಯ ನೀರಾವರಿ ಕೊಳವೆಬಾವಿಗಳ ಸಹಕಾರ ಸಂಘ ನಿ, ಇದರ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸ.ಸಂ.ಸ.ನಿ, ದೊ.ಪುರ. ರವರ ಪತ್ರ ಸಂಖ್ಯೆ: ಸನಿ47:ಸಮಾಪನೆ:67:2003-04, ದಿನಾಂಕ: 28.2.2004.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ:ಆರ್:106:2001-02, ದಿನಾಂಕ: 20.3.2002.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಎಆರ್‌ಡಿ:ಜನಿ:13189:86-87, ದಿನಾಂಕ: 01.06.1987 ರಲ್ಲಿ ನೋಂದಣಿಯಾಗಿದ್ದು, ಈ ಸಂಘವು ಬೈಲಾ ಉದ್ದೇಶಗಳ ರೀತ್ಯಾ

ಕಾರ್ಯಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರಿಂದ ಮತ್ತು ಇದರಿಂದ ಸಂಘದ ಸದಸ್ಯರಿಗೆ ಯಾವುದೇ ಅನುಕೂಲವಾಗದೇ ಇರುವ ಪ್ರಯುಕ್ತ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು ನೋಂದಣಿಯಾದಾಗಿನಿಂದ ಬೈಲಾ ಉದ್ದೇಶಗಳ ರೀತ್ಯಾ ಕಾರ್ಯಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರಿಂದ, ಸಂಘದ ಕಾರ್ಯಕಾರಿ ಸಮಿತಿಯವರು ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ಇಲ್ಲದೇ ಇರುವುದರಿಂದ ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ, ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಉಲ್ಲೇಖ (2)ರ ಪತ್ರದ ಆದೇಶದಲ್ಲಿ ಸಮಾಪನೆಗೊಳಿಸಿ ಶ್ರೀ ಎನ್.ಜಿ. ಪ್ರಸಾದ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕರ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ರವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಈ ಸಂಘದಲ್ಲಿ ಒಟ್ಟು ರೂ.2,430-00ಗಳ ಜವಾಬ್ದಾರಿಯಿದ್ದು ಮತ್ತು ಆಸ್ತಿಗಳು ರೂ.2,077-75 ಗಳಿದ್ದು, ಇವುಗಳ ಬಗ್ಗೆ ಯಾವುದೇ ವಿವರಗಳು ಪತ್ತೆಯಾಗದೇ ಜಿಲ್ಲಾ ಬ್ಯಾಂಕಿನ ಅಮಾನತ್ ಖಾತೆ ಬಾಬ್ತು ರೂ.2,071-00 ಗಳಲ್ಲಿ ರೂ.1,971-00 ಗಳನ್ನು ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಬೆಂಗಳೂರು ಇಲ್ಲಿ ಇರುವ ಉಪನಿಬಂಧಕರ ಪಿ.ಡಿ.ಖಾತೆಗೆ ದಿನಾಂಕ: 27.2.2004 ರಂದು ವರ್ಗಾಯಿಸಿರುತ್ತಾರೆ. ಉಳಿದ ರೂ.100-00 ಗಳನ್ನು ಲೆಕ್ಕಪರಿಶೋಧನಾ ಶುಲ್ಕವನ್ನು ಪಾವತಿಸಿರುತ್ತಾರೆ. ದಿನಾಂಕ: 27.02.2004 ರಂದು ಸಮಾಪನಾಧಿಕಾರಿಯವರು ಸಭೆಯನ್ನು ನಡೆಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ತೀರ್ಮಾನಿಸಿರುತ್ತಾರೆ.

ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ದಿನಾಂಕ: 21.03.2004 ರಂದು **"ದೊಡ್ಡಬಳ್ಳಾಪುರ ಮಿತ್ರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಪ್ರಕಟಣೆಯ ದಿನಾಂಕದಿಂದ 15 ದಿನದೊಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಇದುವರೆಗೂ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಈ ಸಂಘವು ಹೀಗೆ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:106:03-04, ದಿನಾಂಕ: 17ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಮುತ್ತುಗದಹಳ್ಳಿ ಸಾಮೂಹಿಕ ಬೇಸಾಯ ನೀರಾವರಿ ಕೊಳವೆ ಬಾವಿಗಳ ಸಹಕಾರ ಸಂಘ ನಿ., ಇದರ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 17.04.2004 ರಂದು ಹೊರಡಿಸಿರುತ್ತೇನೆ.

ಪಿ.ಆರ್. 667 ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಚಿಕ್ಕಹೆಜ್ಜಾಜಿ ಸಾಮೂಹಿಕ ಬೇಸಾಯ ನೀರಾವರಿ ಕೊಳವೆ ಬಾವಿಗಳ ಸಹಕಾರ ಸಂಘ ನಿ., ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸ.ಸಂ.ಸ.ನಿ, ದೊ.ಪುರ. ರವರ ಪತ್ರ ಸಂಖ್ಯೆ: ಸನಿ47:ಸಮಾಪನೆ:70:2003-04, ದಿನಾಂಕ: 28.2.2004.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:106:01-02, ದಿ: 20.3.2002.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (1)ರ ಪತ್ರದಲ್ಲಿ ನೋಂದಣಿ ಸಂಖ್ಯೆ: ಸಸನಿರಾ:1:ನೊಂದಣಿ:13788:85-86, ದಿನಾಂಕ: 13.6.1984 ರಲ್ಲಿ ನೋಂದಣಿಯಾಗಿದ್ದು, ಈ ಸಂಘವು ಬೈಲಾ ಉದ್ದೇಶಗಳ ರೀತ್ಯಾ ಕಾರ್ಯಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರಿಂದ ಮತ್ತು ಇದರಿಂದ ಸಂಘದ ಸದಸ್ಯರಿಗೆ ಯಾವುದೇ ಅನುಕೂಲವಾಗದ ಪ್ರಯುಕ್ತ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು ನೋಂದಣಿಯಾದಾಗಿನಿಂದ ಬೈಲಾ ಉದ್ದೇಶಗಳ ರೀತ್ಯಾ ಕಾರ್ಯಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರಿಂದ, ಸಂಘದ ಕಾರ್ಯಕಾರಿ ಸಮಿತಿಯವರು ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ಇಲ್ಲದೇ ಇರುವುದರಿಂದ ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ, ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಉಲ್ಲೇಖ (2)ರ ಪತ್ರದ ಆದೇಶದಲ್ಲಿ ಸಮಾಪನೆಗೊಳಿಸಿ ಶ್ರೀ ಎನ್.ಜಿ. ಪ್ರಸಾದ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕರ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ರವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಈ ಸಂಘದಲ್ಲಿ ಒಟ್ಟು ರೂ.74,300-15 ಗಳ ಜವಾಬ್ದಾರಿಯಿದ್ದು ಮತ್ತು ಆಸ್ತಿಗಳು ರೂ.51,030-10 ಗಳಿದ್ದು, ಇವುಗಳ ಬಗ್ಗೆ ಸಂಘದಲ್ಲಿ ಯಾವುದೇ ದಾಖಲೆಗಳು ಲಭ್ಯವಿಲ್ಲದೇ ಇರುವುದರಿಂದ ವಸೂಲಾಗದೇ ಇರುವ ಆಸ್ತಿಯನ್ನು ನಷ್ಟಕ್ಕೆ ಮತ್ತು ಪಾವತಿಸಲು ವಿವರಗಳಿಲ್ಲದ ಜವಾಬ್ದಾರಿಯನ್ನು ಶೂನ್ಯಗೊಳಿಸಿ, ದಿನಾಂಕ: 27.02.2004 ರಂದು ಸಮಾಪನಾಧಿಕಾರಿಯವರು ಸಭೆಯನ್ನು ನಡೆಸಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ತೀರ್ಮಾನಿಸಿರುತ್ತಾರೆ.

ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ ದಿನಾಂಕ: 21.03.2004 ರಂದು **"ದೊಡ್ಡಬಳ್ಳಾಪುರ ಮಿತ್ರ"** ಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಪ್ರಕಟಣೆಯ ದಿನಾಂಕದಿಂದ 15 ದಿನದೊಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ತಿಳಿಸಲಾಗಿತ್ತು. ಆದರೆ

